





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ತೂಕದಲ್ಲಿ ಕಡಿತಗೊಳಿಸಿ ಕೊಡುವವರಿಗೆ ವಿನಾಶವಿದೆ-

وَيْلٌ لِّلْمُطَفِّفِيْنَ ①

2. ಅವರು ಜನರಿಂದ ಪಡೆಯುವಾಗ ಸಂಪೂರ್ಣವಾಗಿ ಪಡೆಯುತ್ತಾರೆ.

الَّذِيْنَ اِذَا اكْتَالُوْا عَلَى النَّاسِ يَسْتَوْفُوْنَ ②

3. ಮತ್ತು ಅಳತೆ ಮಾಡಿ ಅಥವಾ ತೂಕ ಮಾಡಿ (ಜನರಿಗೆ) ಕೊಡುವಾಗ ಕಡಿಮೆ ಕೊಡುತ್ತಾರೆ.

وَاِذَا كَالُوْهُمْ اَوْ وَّزَنُوْهُمْ يُخْسِرُوْنَ ③

4. ಇವರನ್ನು ಎಬ್ಬಿಸಿ ತರಲಾಗುವುದೆಂದು ಇವರು ಗ್ರಹಿಸುವುದಿಲ್ಲವೇ?

اَلَا يَظُنُّ اُولٰٓئِكَ اَنَّهُمْ مَّبْعُوْثُوْنَ ④

5. ಒಂದು ಮಹಾದಿನದಂದು-[1]

لِيَوْمٍ عَظِيْمٍ ⑤

6. (ಅದು) ಎಲ್ಲ ಜನರೂ ಸರ್ವಲೋಕಗಳ ಪಾಲಕ ಪ್ರಭುವಿನ ಮುಂದೆ ನಿಲ್ಲುವ ದಿನವಾಗಿದೆ.

يَّوْمَ يَقُوْمُ النَّاسُ لِرَبِّ الْعٰلَمِيْنَ ⑥

7. ಖಂಡಿತ ಅಲ್ಲ,[2] ನಿಶ್ಚಯವಾಗಿಯೂ ದುಷ್ಕರ್ಮಿಗಳ ಕರ್ಮಪತ್ರವು ಸೆರೆಮನೆಯ ದಾಖಲೆಯಲ್ಲಿದೆ.

كَلَّآ اِنَّ كِتٰبَ الْفُجَّارِ لَفِيْ سِجِّيْنٍ ⑦

8. ಮತ್ತು ಆ ಸೆರೆಮನೆಯ ದಾಖಲೆ ಏನೆಂದು ನಿಮಗೇನು ಗೊತ್ತು?

وَمَآ اَدْرٰىكَ مَا سِجِّيْنٌ ⑧

9. ಅದೊಂದು ಲಿಖಿತ ಗ್ರಂಥವಾಗಿದೆ.

كِتٰبٌ مَّرْقُوْمٌ ⑨

10. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ-

وَيْلٌ يَّوْمَئِذٍ لِّلْمُكَذِّبِيْنَ ⑩

1. ಪುನರುತ್ಥಾನ ದಿನವನ್ನು ಮಹಾದಿನವೆನ್ನಲಾಗಿದೆ. ಏಕೆಂದರೆ ಆ ದಿನದಂದು ಮಾನವರು ಮತ್ತು ಜಿನ್ನ್‌ಗಳೆಲ್ಲರ ಕುರಿತು ಏಕಕಾಲಕ್ಕೆ ವಿಚಾರಣೆ ನಡೆಸಲಾಗುವುದು. ಶಿಕ್ಷೆ-ರಕ್ಷೆಗಳ ಕುರಿತಾದ ಮಹತ್ವದ ತೀರ್ಮಾನಗಳು ಆ ದಿನ ನಡೆಯುವುವು.
2. ಅರ್ಥಾತ್- ಲೋಕದಲ್ಲಿ ಅಪರಾಧಗಳೆಸಗಿದ ನಂತರ ನಾವು ಹಾಗೆಯೇ ತಪ್ಪಿಸಿಕೊಳ್ಳುವೆವು ಎಂಬ ಅವರ ಭಾವನೆ ಖಂಡಿತ ತಪ್ಪು.

11. ಪ್ರತಿಫಲದ ದಿನವನ್ನು ಸುಳ್ಳಾಗಿಸುವವರಿಗೆ.

الَّذِينَ يُكَذِّبُونَ بِيَوْمِ الدِّينِ ﴿١١﴾

12. ಮೇರೆ ಮೀರುವ ದುಷ್ಕರ್ಮಿಯ ಹೊರತು ಇನ್ನಾರೂ ಅದನ್ನು ಸುಳ್ಳಾಗಿಸುವುದಿಲ್ಲ-

وَمَا يُكَذِّبُ بِهِ إِلَّا كُلُّ مُعْتَدٍ أَثِيمٍ ﴿١٢﴾

13. ಅವನಿಗೆ ನಮ್ಮ ಸೂಕ್ತಗಳನ್ನು ಓದಿ ಹೇಳಲಾದಾಗ[3] ಇವೆಲ್ಲ ಪೂರ್ವಕಾಲದ ಕಥೆಗಳು ಎನ್ನುತ್ತಾನೆ.

إِذَا تُتْلَىٰ عَلَيْهِ آيَاتُنَا قَالَ أَسَاطِيرُ الْأَوَّلِينَ ﴿١٣﴾

14. ಖಂಡಿತ ಅಲ್ಲ! ವಾಸ್ತವದಲ್ಲಿ ಇವರ ಹೃದಯಗಳಿಗೆ ಇವರ ದುಷ್ಕರ್ಮಗಳ ತುಕ್ಕು ಹಿಡಿದು ಬಿಟ್ಟಿದೆ.[4]

كَلَّا ۖ بَلْ ۜ رَانَ عَلَىٰ قُلُوبِهِم مَّا كَانُوا يَكْسِبُونَ ﴿١٤﴾

15. ಖಂಡಿತ ಅಲ್ಲ! ನಿಸ್ಸಂದೇಹವಾಗಿಯೂ ಅಂದು ಇವರು ತಮ್ಮ ಪ್ರಭುವಿನ ದರ್ಶನದಿಂದ ವಂಚಿತರಾಗುವರು.

كَلَّا إِنَّهُمْ عَن رَّبِّهِمْ يَوْمَئِذٍ لَّمَحْجُوبُونَ ﴿١٥﴾

16. ತರುವಾಯ ಇವರು ನರಕಾಗ್ನಿಯಲ್ಲಿ ಹೋಗಿ ಬೀಳುವರು.

ثُمَّ إِنَّهُمْ لَصَالُو الْجَحِيمِ ﴿١٦﴾

17. ಆ ಬಳಿಕ ಇವರೊಡನೆ- ಇದು ನೀವು ಸುಳ್ಳಾಗಿಸುತ್ತಿದ್ದ ವಸ್ತುವೇ ಆಗಿದೆ ಎಂದು ಹೇಳಲಾಗುವುದು.

ثُمَّ يُقَالُ هَٰذَا الَّذِي كُنتُم بِهِ تُكَذِّبُونَ ﴿١٧﴾

18. ಖಂಡಿತ ಅಲ್ಲ.[5] ನಿಸ್ಸಂದೇಹವಾಗಿಯೂ ಸಜ್ಜನರ ಕರ್ಮಪತ್ರವು ಶ್ರೇಷ್ಠ ಜನರ ದಾಖಲೆಯಲ್ಲಿದೆ.

كَلَّا إِنَّ كِتَابَ الْأَبْرَارِ لَفِي عِلِّيِّينَ ﴿١٨﴾

19. ಮತ್ತು ಆ ಶ್ರೇಷ್ಠ ಜನರ ದಾಖಲೆ ಏನೆಂದು ನಿಮಗೇನು ಗೊತ್ತು?

وَمَا أَدْرَاكَ مَا عِلِّيُّونَ ﴿١٩﴾

20. ಅದೊಂದು ಲಿಖಿತ ಗ್ರಂಥ-

كِتَابٌ مَّرْقُومٌ ﴿٢٠﴾

21. ಆಪ್ತ ದೇವಚರರು ಅದನ್ನು ನೋಡಿಕೊಳ್ಳುತ್ತಾರೆ.

يَشْهَدُهُ الْمُقَرَّبُونَ ﴿٢١﴾

22. ನಿಸ್ಸಂದೇಹವಾಗಿಯೂ ಸಜ್ಜನರು ಬಹಳ ಸುಖ ಸಂತೋಷ ದಲ್ಲಿರುವರು,

إِنَّ الْأَبْرَارَ لَفِي نَعِيمٍ ﴿٢٢﴾

3. ಅರ್ಥಾತ್- ಪ್ರತಿಫಲದ ದಿನದ ಬಗ್ಗೆ ಸೂಚನೆಯಿರುವ ಸೂಕ್ತಗಳು.

4. ಅರ್ಥಾತ್- ಶಿಕ್ಷೆ-ರಕ್ಷೆಗಳನ್ನು ಪೂರ್ವಕಾಲದ ಕಥೆಗಳೆಂದು ಹೇಳಲು ಯಾವುದೇ ಸಮರ್ಪಕವಾದ ಕಾರಣಗಳಿಲ್ಲ. ಅದನ್ನು ಪೂರ್ವಕಾಲದ ಕಥೆಗಳೆಂದು ಅವರು ಹೇಳಲು ಕಾರಣವೇನೆಂದರೆ ಅವರ ಹೃದಯಕ್ಕೆ ಸಂಪೂರ್ಣವಾಗಿ ಅವರು ಎಸಗುತ್ತಿರುವ ಪಾಪಗಳ ತುಕ್ಕು ಹಿಡಿದಿದೆ. ಆದ್ದರಿಂದಲೇ ಸಾದ್ಯಂತ ಸಮರ್ಪಕವಾಗಿರುವ ವಿಷಯ ಅವರಿಗೆ ಕಟ್ಟು ಕಥೆಗಳಂತೆ ಕಾಣುತ್ತದೆ.

5. ಅರ್ಥಾತ್- ಶಿಕ್ಷೆ-ರಕ್ಷೆಗಳು ಸಂಭವಿಸಲಿಕ್ಕಿಲ್ಲ ಎಂಬ ಅವರ ಭಾವನೆ ತಪ್ಪಾಗಿದೆ.

| | |
|---|---|
| 23. ಉನ್ನತ ಪೀಠಗಳಲ್ಲಿ ಕುಳಿತು ವೀಕ್ಷಿಸುತ್ತಿರುವರು- | عَلَى الْاَرَآئِكِ يَنْظُرُوْنَ ﴿۲۳﴾ |
| 24. ನೀವು ಅವರ ಮುಖಗಳಲ್ಲಿ ಸುಸ್ಥಿತಿಯ ಕಾಂತಿಯನ್ನು ಕಾಣುವಿರಿ. | تَعْرِفُ فِيْ وُجُوْهِهِمْ نَضْرَةَ النَّعِيْمِ ﴿۲۴﴾ |
| 25. ಅವರಿಗೆ ಅತ್ಯಂತ ಸ್ವಚ್ಛವಾದ, ಮುದ್ರೆ ಹಾಕಲಾದ ಮದಿರೆಯನ್ನು ಕುಡಿಸಲಾಗುವುದು- | يُسْقَوْنَ مِنْ رَّحِيْقٍ مَّخْتُوْمٍ ﴿۲۵﴾ |
| 26. ಅದರ ಮೇಲೆ ಕಸ್ತೂರಿಯ ಮೊಹರು ಇರುವುದು. ಸ್ಪರ್ಧಿಸಿ ಜಯಿಸಬಯಸುವವರು ಇದನ್ನು ಪಡೆಯಲಿಕ್ಕಾಗಿ ಸ್ಪರ್ಧಿಸಿ ಜಯಿಸಲು ಪ್ರಯತ್ನಿಸಲಿ. | خِتٰمُهٗ مِسْكٌ ۭ وَفِيْ ذٰلِكَ فَلْيَتَنَافَسِ الْمُتَنَافِسُوْنَ ﴿۲۶﴾ |
| 27. ಆ ಮದಿರೆಯಲ್ಲಿ 'ತಸ್ನೀಮ್' ಬೆರೆತಿರುವುದು-[6] | وَمِزَاجُهٗ مِنْ تَسْنِيْمٍ ﴿۲۷﴾ |
| 28. ಅದೊಂದು ಚಿಲುಮೆಯಾಗಿದ್ದು ಅದರ ನೀರಿನೊಂದಿಗೆ, ಅಲ್ಲಾಹನ ಸಾಮಿಪ್ಯ ಹೊಂದಿದವರು ಮದಿರೆಯನ್ನು ಕುಡಿಯುವರು. | عَيْنًا يَّشْرَبُ بِهَا الْمُقَرَّبُوْنَ ﴿۲۸﴾ |
| 29. ಅಪರಾಧಿಗಳು ಭೂಲೋಕದಲ್ಲಿ ಸತ್ಯವಿಶ್ವಾಸಿಗಳನ್ನು ಗೇಲಿ ಮಾಡುತ್ತಿದ್ದರು. | اِنَّ الَّذِيْنَ اَجْرَمُوْا كَانُوْا مِنَ الَّذِيْنَ اٰمَنُوْا يَضْحَكُوْنَ ﴿۲۹﴾ |
| 30. ಅವರ ಬಳಿಯಿಂದ ಹಾದು ಹೋಗುತ್ತಿದ್ದಾಗ ಕಣ್ಣು ಮಿಟುಕಿಸುತ್ತ ಅವರ ಕಡೆಗೆ ಸನ್ನೆ ಮಾಡುತ್ತಿದ್ದರು. | وَاِذَا مَرُّوْا بِهِمْ يَتَغَامَزُوْنَ ﴿۳۰﴾ |
| 31. ತಮ್ಮ ಮನೆಗಳಿಗೆ ಮರಳುವಾಗ ಮೋಜು ಮಾಡುತ್ತಾ ಮರಳುತ್ತಿದ್ದರು- | وَاِذَا انْقَلَبُوْٓا اِلٰٓى اَهْلِهِمُ انْقَلَبُوْا فَكِهِيْنَ ﴿۳۱﴾ |
| 32. ಮತ್ತು ಅವರನ್ನು ಕಂಡಾಗ, "ಇವರು ದಾರಿಗೆಟ್ಟವರು" ಎಂದು ಹೇಳುತ್ತಿದ್ದರು. | وَاِذَا رَاَوْهُمْ قَالُوْٓا اِنَّ هٰٓؤُلَاۗءِ لَضَاۗلُّوْنَ ﴿۳۲﴾ |

6. 'ತಸ್ನೀಮ್' ಎಂದರೆ ಔನ್ನತ್ಯವೆಂದಾಗಿದೆ. ಚಿಲುಮೆಯನ್ನು 'ತಸ್ನೀಮ್' ಎಂದು ಕರೆಯುವುದರ ಅರ್ಥ ಅದು ಎತ್ತರದಿಂದ ಕೆಳಕ್ಕೆ ಹರಿಯುತ್ತಿರುವುದು ಎಂದಾಗಿದೆ.

33. ವಾಸ್ತವದಲ್ಲಿ ಇವರೇನೂ ಅವರ ಮೇಲ್ವಿಚಾರಕರಾಗಿ ಕಳುಹಿಸಲ್ಪಟ್ಟಿರಲಿಲ್ಲ.

وَمَآ أُرْسِلُوا۟ عَلَيْهِمْ حَٰفِظِينَ ﴿٣٣﴾

34. ಇಂದು ಸತ್ಯವಿಶ್ವಾಸಿಗಳು ಸತ್ಯನಿಷೇಧಿಗಳ ಮೇಲೆ ನಗುತ್ತಿದ್ದಾರೆ,

فَٱلْيَوْمَ ٱلَّذِينَ ءَامَنُوا۟ مِنَ ٱلْكُفَّارِ يَضْحَكُونَ ﴿٣٤﴾

35. ಪೀಠಗಳ ಮೇಲೆ ಕುಳಿತು ಅವರ ಅವಸ್ಥೆಯನ್ನು ನೋಡುತ್ತಿದ್ದಾರೆ.

عَلَى ٱلْأَرَآئِكِ يَنظُرُونَ ﴿٣٥﴾

36. ಸತ್ಯನಿಷೇಧಿಗಳಿಗೆ ಅವರು ಮಾಡುತ್ತಿದ್ದ ಕೃತ್ಯಗಳ ಫಲ ಸಿಕ್ಕಿಯೇ ಬಿಟ್ಟಿತಲ್ಲ![7]

هَلْ ثُوِّبَ ٱلْكُفَّارُ مَا كَانُوا۟ يَفْعَلُونَ ﴿٣٦﴾ ع

---

7. ಈ ಮಾತಿನಲ್ಲಿ ಲಘುವಾದ ಒಂದು ವ್ಯಂಗ್ಯವಿದೆ. ಸತ್ಯನಿಷೇಧಿಗಳು ಪುಣ್ಯಕಾರ್ಯವೆಂದು ಭಾವಿಸಿ ಸತ್ಯವಿಶ್ವಾಸಿಗಳಿಗೆ ಉಪದ್ರವ ಕೊಡುತ್ತಿದ್ದರು. ಆದ್ದರಿಂದ ಅವರ ಕುರಿತು ಹೀಗೆನ್ನಲಾಗಿದೆ. ಪರಲೋಕದಲ್ಲಿ ಸತ್ಯವಿಶ್ವಾಸಿಗಳು ಸ್ವರ್ಗದಲ್ಲಿ ಹಾಯಾಗಿ ಕುಳಿತು ನರಕದಲ್ಲಿ ಉರಿಯುತ್ತಿರುವ ಸತ್ಯನಿಷೇಧಿಗಳ ಅವಸ್ಥೆಯನ್ನು ನೋಡುತ್ತಿರುವರು ಮತ್ತು ಮನಸ್ಸಿನಲ್ಲೇ, 'ಇವರಿಗೆ ಇವರ ಕರ್ಮಗಳ ಒಳ್ಳೆಯ ಪ್ರತಿಫಲ ಸಿಕ್ಕಿದೆ' ಎನ್ನುತ್ತಿರುವರು.